ಮಹಾತ್ಮರು ಕಂಡಂತ ಶ್ರೀ ಕ್ಷೇತ್ರ ಮೇಲ್ಪೆಣ್ಣಾಕ್ಕಂ.

**ಶ್ರೀ ಶ್ರೀ ಶ್ರೀ ಚಂದ್ರಶೇಖರೇಂದ್ರ ಸರಸ್ವತೀ ಮಹಾಸ್ವಾಮಿಗಳು

ಅವರ ಅನುಗ್ರಹ ಭಾಷಣದಲ್ಲಿ. ಈ ದೇಹದಿಂದ ವೈಕುಂಠಕ್ಕೆ ಹೋಗಿ ನಮ್ಮ ಕಣ್ಣುಗಳಿಂದ ಅಲ್ಲಿನ ಭಗವಂತನನ್ನು ನೋಡಲು ಅಸಾಧ್ಯ .ನೋಡಬೇಕೆಂಬ ಹಂಬಲವಿರುವವರು

ಮೇಲ್ಪೆಣ್ಣಾಕ್ಕಂ ಸನ್ನಿಧಿಯಲ್ಲಿ ಸಾಕ್ಷಾತ್ ವೈಕುಂಠನಾಥನಾದ ಶ್ರೀಮನ್ನಾರಾಯಣನನ್ನು ಇಲ್ಲಿ ಪ್ರತ್ಯಕ್ಷವಾಗಿ ನೋಡಬಹುದು ಎಂದು ಭಕ್ತರಿಗೆ ತಿಳಿಸಿ ಶ್ರೀ ಮಹಾಲಕ್ಷ್ಮೀ ಅಮ್ಮನವರು ಪ್ರಧಾನವಾಗಿರುವ ಈ ಕ್ಷೇತ್ರ ನಮಗೆ ಅತ್ಯಂತ ಪ್ರಿಯವಾದದ್ದು ಎಂದು ತಿಳಿಸಿದರು.

**ಮಹಾತ್ಮ.ಶ್ರೀ ಶ್ರೀ ಅಣ್ಣಾ (ಶ್ರೀ ಕೃಷ್ಣ ಪ್ರೇಮಿ ಅಣ್ಣಾ ಭಗದಂಶಸಂಭೂತರು)

ಶ್ರೀ ಕ್ಷೇತ್ರವನ್ನು ದರ್ಶಿಸಲು ದೇವೇಂದ್ರಾದಿ ದೇವತೆಗಳು ಸ್ವಾಮಿಯ ಅನುಮತಿಗಾಗಿ ಕ್ಷೇತ್ರದ ಹೊರಗೆ ಕಾಯುತ್ತಾ ಇರುತ್ತಾರೆ .ಅಷ್ಟಸಿದ್ಧಿಯನ್ನು ಹೊಂದಿದ ಸಿದ್ಧರು ಮಹರ್ಷಿಗಳು ದೇಹತ್ಯಾಗದ ನಂತರ ಕೈಲಾಸ, ಬ್ರಹ್ಮ ಲೋಕ, ವೈಕುಂಠಾದಿ ಪರಮಪದವನ್ನು ಸೇರಬೇಕೆಂದು ಇಚ್ಛಿಸುವುದು ಸಹಜ ಆದರೆ ಶರೀರವಿರುವಾಗಲೇ ಒಂದು ಬಾರಿಯಾದರೂ ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿಯನ್ನು ದರ್ಶಿಸಬೇಕೆಂದು ಪ್ರತಿ ನಿತ್ಯವೂ ಸ್ವಾಮಿಯನ್ನು ಪ್ರಾರ್ಥಿಸುತ್ತಾ ಇರುತ್ತಾರೆ.

ದೇವತೆಗಳಿಗೆ, ಮಹರ್ಷಿಗಳಿಗೇ ಅಸಾಧ್ಯವಾದ ಭಗವದ್ದರ್ಶನ ಕಲಿಯುಗದಲ್ಲಿ ನಮಗೆ ಲಭ್ಯವಾಗಿರುವುದು ಎಂದರೆ ಸ್ವಾಮಿ ಎಷ್ಟು ಕರುಣಾಮೂರ್ತಿಯಾಗಿರಬೇಕೆಂದು ವರ್ಣಿಸಲು ಸಾಧ್ಯವಿಲ್ಲ.

**ಗುರೂಜೀ ಶ್ರೀ ಶ್ರೀ ಮಹಾರಣ್ಯಂ ಮುರಳೀಧರ ಸ್ವಾಮಿಗಳು

ದೇವಸ್ಥಾನದ ಮಹಾಕುಂಭಾಭಿಷೇಕ ಪ್ರತಿಷ್ಠಾ ಮಹೋತ್ಸವ ಸಮಯದಲ್ಲಿ ಆಗಮಿಸಿ *ಮೇಲ್ಪೆಣ್ಣಾಕ್ಕಂ ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿ ನಮ್ಮೊಂದಿಗೆ ಮಾತನಾಡುತ್ತಾರೆ ನಾವು ಭಕ್ತಿ ಭಾವದಿಂದ ಪ್ರಾರ್ಥಿಸಿದರೆ ಸಾಕು ನಮ್ಮ ಮೊರೆ ಅವರಿಗೆ ಕೇಳುತ್ತದೆ.

ಈ ಕ್ಷೇತ್ರವನ್ನು ದರ್ಶಿಸಿದರೆ ಮತ್ತೆ ಯಾವ ಸನ್ನಿಧಿಗೂ ಹೋಗುವ ಅವಶ್ಯಕತೆ ಇಲ್ಲದಂತೆ ಎಲ್ಲಾ ಸ್ವಾಮಿಯ ಸನ್ನಿಧಿಗಳೂ ಆಶ್ಚರ್ಯಕರವಾಗಿ ಕಣ್ತುಂಬ ದರ್ಶನವನ್ನು ಪಡೆಯಬಹುದು.

ನಿತ್ಯವೂ ಸಪ್ತರ್ಷಿಗಳು ಸ್ವಾಮಿಯನ್ನು ಸ್ತುತಿಸುವ,ಅಷ್ಟಸಿದ್ಧಿಯನ್ನು ಹೊಂದಿರುವ ಮಹಾತ್ಮರು ಅದೃಶ್ಯ ರೂಪದಲ್ಲಿ ತಪಸ್ಸನ್ನು ಆಚರಿಸುವ, ಸಾಕ್ಷಾತ್ ಶ್ರೀ ಆದಿಶೇಷನೇ ರಾತ್ರಿ ಸಮಯದಲ್ಲಿ ಆರಾಧನೆಯನ್ನು ಮಾಡುವ ಈ ಕ್ಷೇತ್ರ .ಸಿದ್ಧ ಕ್ಷೇತ್ರ, ಸರ್ಪಕ್ಷೇತ್ರ,ತಪೋಕ್ಷೇತ್ರವಾಗಿ ವಿರಾಜಮಾನವಾಗುತ್ತಿದೆ.

ಈ ಕ್ಷೇತ್ರದಲ್ಲಿ ನಾಮ ಸಂಕೀರ್ತನೆ ಅತ್ಯಂತ ಫಲದಾಯಕ

ಒಂದು ಬಾರಿ ಭಗವನ್ನಾಮ ಸ್ಮರಣೆ ಮಾಡಿದರೆ ಕೋಟಿಸಂಖ್ಯೆಯಲ್ಲಿ ಜಪಿಸಿದ ಪುಣ್ಯ ಫಲ ಸಿಗುವ ಕ್ಷೇತ್ರ.

**ಜ್ಯೋತಿಷ್ಯ ಚಕ್ರವರ್ತಿ ಮಹಾತ್ಮ

ಶ್ರೀ ಮಾನ್.ಉ.ವೇ.ಶ್ರೀ.A.M.ರಾಜಗೋಪಾಲನ್ ಸ್ವಾಮಿಗಳು

ಹೆಚ್ಚು ಪುಣ್ಯಫಲವಾದರೂ ಇರಬೇಕು ಇಲ್ಲವೆಂದರೆ ಭಗವಂತನಿಗೆ ನಮ್ಮ ಮೇಲೆ ಕರುಣೆ ಬರಬೇಕು ಆಗ ಮಾತ್ರ ಶ್ರೀ ಮೇಲ್ಪೆಣ್ಣಾಕ್ಕಂ ಕ್ಷೇತ್ರದಲ್ಲಿ ಸ್ವಾಮಿಯನ್ನು ದರ್ಶಿಸಿಬಹುದು ಇಲ್ಲವೆಂದರೆ ಈ ದೇವಸ್ಥಾನದ ಶಿಖರವು ನಮ್ಮ ಕಣ್ಣಿಗೆ ಕಾಣದು.

ಜಾತಕದಲ್ಲಿ ಅತ್ಯಂತ ಪ್ರಮಾದಕರವಾದ ದೋಷ ವೆಂದರೆ

ಕಾಲಸರ್ಪ ದೋಷ ,ಇದರ ನಿವಾರಣೆ ಪರಿಹಾರ ಅಸಾಧ್ಯ. ಅಂತಹ ದೋಷವು, ಸ್ವಾಮಿಯ ದರ್ಶನ ಮಾತ್ರದಿಂದಲೇ



ನಿವಾರಣೆಯಾಗುವುದು.

ಹನ್ನೆರಡು ರಾಶಿಗಳಿಗೂ ಒಂದೇ ಕ್ಷೇತ್ರದಲ್ಲಿ ದೋಷ ಪರಿಹಾರ ಸಿಗುತ್ತದೆ ಅಂದರೆ ಅದು ಮೇಲ್ಪೆಣ್ಣಾಕ್ಕಂ ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿಯ ಸನ್ನಿಧಿ.

ಕ್ಷೇತ್ರದ ದರ್ಶನ ಪಡೆದವರಿಗೆ ಪ್ರಾರಬ್ಧ ಕರ್ಮಗಳು ತೊಲಗಿ ಹೊಸ ಜನ್ಮ ಪಡೆದಂತೇ ಯಾವುದೇ ಕುಂದು ಕೊರತೆಗಳಿಲ್ಲದೇ ಸುಖ-ಸಂತೋಷದ ಜೀವನವನ್ನು ಪಡೆಯುತ್ತಾರೆ.

ಶ್ರೀ ಲಕ್ಷ್ಮೀ ನಾರಾಯಣ ಹೃದಯ ಸ್ತೋತ್ರದ ಮಹಿಮೆ.

ಪ್ರತಿನಿತ್ಯ ಶ್ರೀ ಲಕ್ಷ್ಮೀ ನಾರಾಯಣ ಹೃದಯ ಸ್ತೋತ್ರವನ್ನು ಪಠಿಸಿದವರಿಗೆ ಸಕಲ ಸೌಖ್ಯಗಳು ದೊರಕುತ್ತವೆ.

ಈ ಸ್ತೋತ್ರವನ್ನು ಪಾರಾಯಣ ಮಾಡುವವರ ವಂಶದಲ್ಲಿ

ಸಂತಾನ ಹೀನತೆ ಇರುವುದಿಲ್ಲ.

ವಿಷ್ಣು ಅಂಶದಲ್ಲಿ ಸಂತಾನ ಪ್ರಾಪ್ತಿ ಆಗುವುದು.

ಎಷ್ಟೋ ಜನ್ಮಗಳ ತಪ: ಫಲದಿಂದ ಮಾತ್ರ ಈ ಸ್ತೋತ್ರ ಲಭಿಸುತ್ತದೆ.

*ಪ್ರತಿ ಶುಕ್ರವಾರ ಸ್ವಾಮಿಯ ಅಭಿಷೇಕ ದರ್ಶನ ವಿಶೇಷ ಈ ಅಭಿಷೇಕ ಸಮಯದಲ್ಲಿ ಮಾತ್ರ ಆದಿಶೇಷನನ್ನು ನೋಡಬಹುದು. ಪ್ರಾರ್ಥನೆಗಾಗಿ ಬರುವವರಿಗೆ ಪಾಯಸ ಪ್ರಸಾದವನ್ನು ನೀಡುತ್ತಾರೆ.

*ಸ್ವಾಮಿಯ ತಿರುನಕ್ಷತ್ರ ಉತ್ತರಾಷಾಡ.

ಪ್ರತಿ ತಿಂಗಳು ಉತ್ತರಾಷಾಡ ನಕ್ಷತ್ರದಂದು

05:00 - ಸುಪ್ರಭಾತ

05:30 - ಅಭಿಷೇಕ

06:30 - ಗೋ ಪೂಜೆ

07:00 - ಪ್ರಸಾದ ವಿತರಣೆ

07:30 - ಹೋಮ ಆರಂಭ (ವಿಶೇಷವಾಗಿ ಎಂಟು ವಿಧವಾದ ಹೋಮಗಳನ್ನು ಮಾಡುತ್ತಾರೆ.

ಶ್ರೀ ಲಕ್ಷ್ಮೀ ನಾರಾಯಣ ಹೃದಯ ಮೂಲ ಮಂತ್ರ ಹೋಮ.

ಶ್ರೀ ಸುದರ್ಶನ ಹೋಮ

ಶ್ರೀ ಧನ್ವಂತರಿ ಹೋಮ

ಶ್ರೀ ಆವಂತೀ ಹೋಮ

ಶ್ರೀ ಲಕ್ಷ್ಮೀ ನಾರಾಯಣ ಮೂಲ ಮಂತ್ರ ಹೋಮ

ಪುರುಷ ಸೂಕ್ತ ಹೋಮ

ಶ್ರೀ ಸೂಕ್ತ ಹೋಮ

ಶ್ರೀ ಸಂತಾನ ಗೋಪಾಲ ಹೋಮ)

10:30 - ಶ್ರೀ ಲಕ್ಷ್ಮೀ ನಾರಾಯಣ ಹೃದಯ ಸ್ತೋತ್ರ ಪಾರಾಯಣ

11:15 - ಶ್ರೀದೇವಿ, ಭೂದೇವಿ, ಸಮೇತ ಶ್ರೀ ಕಳ್ಯಾಣ ಗೋವಿಂದರಾಜ ಸ್ವಾಮಿ ಕಳ್ಯಾಣ

01:00 - ಪ್ರಸಾದ ವಿನಿಯೋಗ.

090031 77722

https://maps.app.goo.gl/EBGCopFuFP9M1anX7



**ಧರ್ಮಕರ್ತರು**
**ಶ್ರೀ.D.ಮಣಿವಣ್ಣನ್**
9003177722
9383145661





**ಸತ್ಯಯುಗದಲ್ಲಿ ಭಾರ್ಗವಮಹರ್ಷಿ ತಪಸ್ಸನ್ನು ಆಚರಿಸಿ ಲಕ್ಷ್ಮೀನಾರಾಯಣ ಹೃದಯ ಸ್ತೋತ್ರವನ್ನು ಪಡೆದಂತ ಕ್ಷೇತ್ರ. ಆ ಸ್ತೋತ್ರದ ಜಪದಿಂದ ಭಾರ್ಗವ ಮಹರ್ಷಿ ಗೆ ದರ್ಶನವನ್ನು ಕೊಟ್ಟರು ಶ್ರೀ ಲಕ್ಷ್ಮೀ ನಾರಾಯಣ ಸ್ವಾಮಿ.**

ಶಂಖ, ಚಕ್ರಗಳನ್ನು ಧರಿಸಿ ಅಭಯ ಮುದ್ರೆಯನ್ನು ನೀಡುತ್ತಾ ಲಕ್ಷ್ಮ್ಯಾಲಿಂಗಿತ ನಾಗಿ ಮುಗುಳ್ನಗೆಯನ್ನು ಬೀರುತ್ತಾ

ಸಹಸ್ರಚಂದ್ರ ಕಾಂತಿಯುತ ಜಗನ್ಮೋಹನಕರವಾದ ಶ್ರೀ ಲಕ್ಷ್ಮೀ ನಾರಾಯಣ ಸ್ವಾಮಿಯು ಭಾರ್ಗವ ಮಹರ್ಷಿಯ ಬೇಡಿಕೆಯಂತೇ ಈ ಕ್ಷೇತ್ರದಲ್ಲಿ ನೆಲೆಸಿ ಭಕ್ತರನ್ನು ಅನುಗ್ರಹಿಸುವುದಾಗಿ ವರವನ್ನಿತ್ತರು.

ಸತ್ಯಯುಗದಲ್ಲಿ ಹನ್ನೊಂದು ಅಡಿ ಎತ್ತರದ

ಅರ್ಚಾಮೂರ್ತಿಯಾಗಿ(ಸಾಲಿಗ್ರಾಮ ಮೂರ್ತಿ) ದರ್ಶನವನ್ನು ಕೊಡುತ್ತಾ ಇದ್ದಂತಹ ಸ್ವಾಮಿ ಧರ್ಮವು ಕಡಿಮೆಯಾದಂತೆಯಲ್ಲಾ

ತ್ರೇತಾಯುಗದಲ್ಲಿ ಒಂಭತ್ತು ಅಡಿ

ದ್ವಾಪರ ಯುಗದಲ್ಲಿ ಆರು ಅಡಿ

ಈಗ ಕಲಿಯುಗದಲ್ಲಿ ಎರಡೂವರೆ ಅಡಿ ಎತ್ತರದ ಸ್ವರೂಪದಲ್ಲಿ ದರ್ಶನವನ್ನು ಪಡೆಯಬಹುದು.

ನಾಲ್ಕುಯುಗಗಳಿಂದ ಈ ಕ್ಷೇತ್ರದಲ್ಲಿ ನೆಲೆಸಿ ಯುಗಧರ್ಮಕ್ಕೆ ತಕ್ಕಂತೆ ತನ್ನನ್ನು ಬದಲಿಕೊಂಡು ಭಕ್ತಸುಲಭನಾಗಿರುವುದರಿಂದ ಇವರನ್ನು ಯುಗನಾರಾಯಣ ಸ್ವಾಮಿ ಎಂದು ಕರೆಯುತ್ತಾರೆ.

ಶ್ರೀ ಮಹಾಲಕ್ಷ್ಮೀ ಅಮ್ಮನವರಿಗೆ ಹೆಚ್ಚು ಪ್ರಾಧಾನ್ಯತೆಯನ್ನು ನೀಡಿದಂತ ಕ್ಷೇತ್ರ.

ಯಾವುದೇ ಕ್ಷೇತ್ರದಲ್ಲಿ ಅಥವಾ ಸನ್ನಿಧಿಯಲ್ಲಿ ಅಮ್ಮನವರ ಅನುಗ್ರಹ ಪಡೆಯಲು ಸ್ವಾಮಿ ಅನುಮತಿ ಇರಬೇಕು.

ಅನುಮತಿ ದೊರೆತರೂ ಒಂದು ಪ್ರಾರ್ಥನೆಯನ್ನು ಮಾತ್ರ ಈಡೇರಿಸುತ್ತಾರೆ.

ಆದರೆ ಮೇಲ್ಪೆಣ್ಣಾಕ್ಕಂ ಸನ್ನಿಧಿಯಲ್ಲಿ ಅಷ್ಟಲಕ್ಷ್ಮೀಯರು ಒಂದೇ ಸ್ವರೂಪದಲ್ಲಿ ನೆಲೆಸಿ ನಾವು ಯಾವ ಬೇಡಿಕೆಯಿಂದಾಗಿ ಬಂದಿರುವೆವೋ ಆ ರೂಪದಲ್ಲಿ ಒಂದೇ ಸಮಯದಲ್ಲಿ ಸ್ವಾಮಿಯ ಅನುಮತಿ ಇಲ್ಲದೆ ಸ್ವಯಂ ಶ್ರೀ ಮಹಾಲಕ್ಷ್ಮೀ ಅಮ್ಮನವರು ಮೂರು ಅನುಗ್ರಹಗಳನ್ನು(ವರಗಳನ್ನು) ಕೊಡುವಂತಹ ಕ್ಷೇತ್ರ.

ಹಾಗಾಗಿ ಈ ಕ್ಷೇತ್ರದಲ್ಲಿ ಶ್ರೀ ಮಹಾಲಕ್ಷ್ಮೀ ಅಮ್ಮನವರಿಗೆ ಸ್ವತಂತ್ರ ಲಕ್ಷ್ಮೀ ಎಂಬ ನಾಮವು ವಿಶೇಷ.

ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಪರಬ್ರಹ್ಮಣೇ ನಮಃ!!

ಶ್ರೀ ಸ್ವತಂತ್ರಲಕ್ಷ್ಮೀನಾಯಿಕಾ ಸಮೇತ ಶ್ರೀ ಯುಗನಾರಾಯಣ

ದಂಪತಿಗಳು ಸತ್ಯಯುಗದಲ್ಲಿ ಈ ಕ್ಷೇತ್ರದಲ್ಲಿ ನೆಲೆಸಿದ ಕ್ಷಣದಿಂದ ಇಲ್ಲಿಯ ವರೆಗೂ ಸಪ್ತರ್ಷಿಗಳು (ಅತ್ರಿ,ಭೃಗು,ಕುತ್ಸ,ವಶಿಷ್ಠ,ಗೌತಮ,ಕಾಶ್ಯಪ,ಆಂಗೀರಸ,) ಗರ್ಭಾಲಯದಲ್ಲೇ ನಿಂತು ಸ್ವಾಮಿಯನ್ನು ಪ್ರಾರ್ಥಿಸುತ್ತಾ ವಿನಮ್ರರಾಗಿ ಸದಾಕಾಲ ಆ ದಿವ್ಯ ದಂಪತಿಗಳನ್ನು ಸ್ತುತಿಸುತ್ತಿರುವುದರಿಂದ ಇದು ತಪೋಕ್ಷೇತ್ರವಾಗಿದೆ.

ಪ್ರಪಂಚದಲ್ಲೇ ಎಲ್ಲಿಯೂ ಕಾಣದಂತಹ ಒಂದು ಅದ್ಭುತ

ಶ್ರೀ ಮಹಾಲಕ್ಷ್ಮೀ ಅಮ್ಮನವರ ಕಣ್ನೋಟವು ಶ್ರೀ ಯುಗನಾರಾಯಣ ಸ್ವಾಮಿ ಯ ನೋಟವು ಸಮಾನ ರೇಖೆಯಲ್ಲಿ ಬರುವಂತ ಭಕ್ತರ ಮೇಲೆ ಬೀಳುವುದು ತುಂಬಾ ವಿಶೇಷವಾಗಿದೆ.

ಅವರಿಬ್ಬರ ಕಣ್ಣಿನ ನೋಟ ನಮ್ಮ ಮೇಲೆ ಪ್ರಸರಿಸುವುದರಿಂದ ಏನು ಲಾಭ?

ಇಂದ್ರನು ಕ್ಷೀರಸಾಗರ ಮಥನದ ನಂತರ ತನ್ನ ಪದವಿಗಾಗಿ ಹೀಗೆ ಪ್ರಾರ್ಥಿಸುತ್ತಾನೆ.

ಧಾರಾಪುತ್ರಸ್ತದಾಗಾರ ಸುಹೃದ್ಧಾನ್ಯ ಧನಾಧಿಕಂ|

ಭವತ್ಯೇತನ್ಮಹಾಭಾಗೇ ನಿತ್ಯಂ ತ್ವದ್ವೀಕ್ಷಣಾತ್ ನೃಣಾಂ||

ಯೋಗ್ಯವಾದವರೊಂದಿಗೆ ವಿವಾಹ,ಸತ್ಸಂತಾನ,ಗೃಹ,ಬಂಧು-ಮಿತ್ರರು, ಅತ್ಯಧಿಕವಾದ ಧನ-ಧಾನ್ಯವು ನಿತ್ಯವೂ ನಿನ್ನ ಕಣ್ನೋಟ ಯಾರಮೇಲೇ ಬೀರುವುದೋ ಅವರಿಗೆ ಈ

ಸಕಲ ಸೌಖ್ಯ ಗಳು ದೊರೆಯುತ್ತವೆ ಎಂದು ಪ್ರಾರ್ಥಿಸುತ್ತಾನೆ.

ಹಾಗಾಗಿ ಈ ಕ್ಷೇತ್ರದಲ್ಲಿ ವಿವಾಹ ಪ್ರಾರ್ಥನೆ,

ಸತ್ಸಂತಾನಕ್ಕಾಗಿ, ಅನ್ಯೋನ್ಯ ದಾಂಪತ್ಯಕ್ಕಾಗಿ, ವ್ಯಾಪಾರ ಲಾಭ, ಉನ್ನತ ಅಧಿಕಾರ ಪ್ರಾಪ್ತಿಗಾಗಿ, ಸಾಲಬಾಧೆ ನಿವಾರಣೆಗಾಗಿ ಸಾವಿರಾರು ಭಕ್ತರು ಆಗಮಿಸುತ್ತಾರೆ.

ತ್ರೇತಾಯುಗದಲ್ಲಿ ಶ್ರೀರಾಮ ದೇವರು ಶ್ರೀ ಆಂಜನೇಯಸ್ವಾಮಿಗೆ(ಅಸುರರನ್ನು ಸಂಹರಿಸಿದ ಕಾರಣ) ಈ ಕ್ಷೇತ್ರದಲ್ಲಿ ತಪಸ್ಸನ್ನು ಆಚರಿಸುವಂತೆ ಆದೇಶವನ್ನು ನೀಡುತ್ತಾರೆ ಆಗ ಶ್ರೀ ಆಂಜನೇಯ ಸ್ವಾಮಿಯವರು ಮೂರು ಮಂಡಲ ಕಾಲ(48x3=144) ತಪಸ್ಸನ್ನು ಆಚರಿಸುತ್ತಾರೆ

ಯೋಗಾಂಜನೇಯರಾಗಿ ನೆಲೆಸಿರುವ ಸ್ವಾಮಿಯನ್ನು ಇಲ್ಲಿ ದರ್ಶಿಸಬಹುದು .

ಜಾತಕದಲ್ಲಿನ ದೋಷ ನಿವಾರಣೆಗಾಗಿ ಹಲವಾರು ಭಕ್ತರು

ಸ್ವಾಮಿಯ ಅಭಿಷೇಕ ದರ್ಶನಕ್ಕೆ ಬರುತ್ತಾರೆ.

ಕಾಲಸರ್ಪ ದೋಷ,ಅಂಗಾರಕ ದೋಷ/ಕುಜ ದೋಷ,

ವಿವಾಹ ಆಲಸ್ಯ, ಸಂತಾನ ಸಮಸ್ಯೆ ಇರುವವರು ಅಭಿಷೇಕದ ಸಮಯದಲ್ಲಿ ಶ್ರೀ ಯುಗನಾರಾಯಣ ಸ್ವಾಮಿಯ ಕೊರಳಲ್ಲಿ ವೈಜಯಂತಿ ಮಾಲೆಯಾಗಿ ಅಲಂಕೃತವಾದ ಆದಿಶೇಷನ ದರ್ಶನದಿಂದ ಸಕಲ ದೋಷಗಳು ನಿವಾರಣೆಯಾಗುತ್ತವೆ ಸಕಾಲದಲ್ಲಿ ವಿವಾಹ, ಸತ್ಸಂತಾನ, ಅನ್ಯೋನ್ಯ ದಾಂಪತ್ಯ, ಧನ ಧಾನ್ಯ ಸಮೃದ್ಧಿ ದೊರೆಯುತ್ತವೆ.

ಜಾತಕದಲ್ಲಿ ಅತ್ಯಂತ ಪ್ರಮಾದಕರವಾದ ದೋಷ ಕಾಲಸರ್ಪ ದೋಷ.

ಇದರ ನಿವಾರಣೆ ತುಂಬಾ ಕಠಿಣ ಆದರೆ ಯಾರು ಶ್ರೀ ಕ್ಷೇತ್ರವನ್ನು ದರ್ಶಿಸುತ್ತಾರೋ ಅವರಿಗೆ ದರ್ಶನಮಾತ್ರದಿಂದಲೇ ಸಕಲ ದೋಷಗಳು ಸ್ವಾಮಿಯ ಕರುಣಾಕಟಾಕ್ಷ ವೀಕ್ಷಣೆಯಿಂದ ನಿವಾರಣೆಯಾಗುತ್ತವೆ.

ಹನ್ನೊಂದು ರಾಜಗೋಪುರಗಳಿಂದ ರಾರಾಜಿಸುತ್ತಿದ್ದ

ಶ್ರೀ ಕ್ಷೇತ್ರದ ಮೇಲೆ ಮೊಘಲರು ದಂಡಯಾತ್ರೆಗೆ ಬರುವ ಸಮಯದಲ್ಲಿ ಸ್ವಾಮಿಯ ಸೇವೆಯಲ್ಲಿದ್ದ ಶ್ರೀಉಪನಿಷದ್ಬ್ರಹ್ಮೇಂದ್ರ ಮಠದ ಸ್ವಾಮಿಗಳು ಮೂಲ ಮೂರ್ತಿಯನ್ನು ರಕ್ಷಿಸುವ ಸಲುವಾಗಿ ಮೈಸೂರಿನ ಸಮೀಪಕ್ಕೆ ಕೊಂಡೊಯ್ದರು .

ಕೆಲವು ವರ್ಷಗಳ ಕಾಲ ಅಲ್ಲಿಯೇ ಸ್ವಾಮಿಗೆ ನಿತ್ಯ ಪೂಜಾದಿಗಳು ನೆರವೇರಿಸುತ್ತಾ ಬಂದರು.

ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿ ರಕ್ಷಣೆ ಹೊಂದುತ್ತಿರುವ ಆ ಪ್ರಾಂತ್ಯದ ಅರಸನಿಗೆ ಸ್ವಾಮಿಯ ಮೇಲೆ ಅಪಾರವಾದ ಭಕ್ತಿ.

ಒಂದು ದಿನ ಶ್ರೀಉಪನಿಷದ್ಬ್ರಹ್ಮೇಂದ್ರ ಮಠದ ಸ್ವಾಮಿಗಳ ಬಳಿಬಂದು ವಿಶಾಲವಾದ ಪ್ರಾಕಾರಗಳಿಂದ ಭವ್ಯವಾದ ಮಂದಿರವನ್ನು ನಿರ್ಮಿಸುವುದಕ್ಕೆ ಅರಸನು ಅನುಮತಿಯನ್ನು ಕೇಳಿದನು.

ಆಗ ಮಠದ ಶ್ರೀ ಸ್ವಾಮಿಗಳು ಭಗವಂತನಲ್ಲಿ ಪ್ರಾರ್ಥಿಸಿದಾಗ

ಶ್ರೀಮನ್ನಾರಾಯಣನು ಹೀಗೆ ಹೇಳುತ್ತಾನೆ.

ಭರತಭೂಮಿಯಲ್ಲಿ ಹದಿನೆಂಟು ಕ್ಷೇತ್ರಗಳಲ್ಲಿ ಸಾಲಿಗ್ರಾಮ



ಮೂರ್ತಿಯಾಗಿ ಆವಿರ್ಭವಿಸಿ ಅದರಲ್ಲಿಯೂ ಎಂಟು ಕ್ಷೇತ್ರಗಳಲ್ಲಿ ಅಶಿಲ್ಪಿಕರವಾಗಿ(ಸ್ವಯಂ ವ್ಯಕ್ತವಾಗಿ) ಇದ್ದರೂ ದಂಪತಿಯಾಗಿ ಮೊದಲಬಾರಿಗೆ ದರ್ಶನವನ್ನು ನೀಡಿದ ಕ್ಷೇತ್ರ ಮೇಲ್ವೆಣ್ಬಾಕ್ಕಂ, ವಿಶೇಷವಾಗಿ ಶ್ರೀಲಕ್ಷ್ಮೀ ನಾರಾಯಣ ಹೃದಯ ಸ್ತೋತ್ರದ ಆವಿರ್ಭಾವದಿಂದ ಪುನೀತವಾದ ಆ ಕ್ಷೇತ್ರ ನನಗೆ ಅತ್ಯಂತ ಪ್ರಿಯವಾದದ್ದು .

ಹಾಗಾಗಿ ಇಂದೇ ನಾವು ಮೇಲ್ವೆಣ್ಬಾಕ್ಕಂ ಕ್ಷೇತ್ರಕ್ಕೆ ಹಿಂದಿರುಗೋಣವೆಂದು ನುಡಿದರು.

ಈ ಮಾತುಗಳನ್ನು ಕೇಳಿ ಅರಸನಿಗೆ ತುಂಬಾ ದು:ಖ ಉಂಟಾಯಿತು ಆದರೂ ಸ್ವಾಮಿಯ ಇಚ್ಛೆಯಂತೇ ಮೇಲ್ವೆಣ್ಬಾಕಕ್ಕೆ ಕಳುಹಿಸಿ ಕೊಟ್ಟರು.

ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿಯನ್ನು ಕ್ಷೇತ್ರಕ್ಕೆ ಕರೆತಂದು

ಸ್ವಾಮಿಯ ಮೂಲಸ್ಥಾನದಲ್ಲಿ ಚಿಕ್ಕದಾದ ಒಂದು ಸನ್ನಿಧಿಯನ್ನು ನಿರ್ಮಿಸಿ ಆಗಮೋಕ್ತವಾಗಿ ಪ್ರತಿಷ್ಠಾದಿಗಳನ್ನು ನೆರವೇರಿಸಿ ನಿತ್ಯವೂ ಪೂಜಾ ಕೈಂಕರ್ಯಗಳನ್ನು ಶ್ರದ್ಧೆಯಿಂದ ಆಚರಿಸುತ್ತಿದ್ದರು.

ಸಾವಿರದ ಒಂಭೈನೂರ ಐವತ್ತೇಳನೆಯ(1957) ವರ್ಷ ಶ್ರೀಕಾಂಚೀ ಮೂಲಾಮ್ನಾಯ ಸರ್ವಜ್ಞ

ಪೀಠಾಧೀಶ್ವರರು. ಶ್ರೀ ಶ್ರೀ ಶ್ರೀ ಚಂದ್ರಶೇಖರೇಂದ್ರ ಸರಸ್ವತೀ ಮಹಾಸ್ವಾಮಿಗಳು

ಶ್ರೀ ಕ್ಷೇತ್ರವನ್ನು ದರ್ಶಿಸಿ ಸ್ವತಃ: ತಾವೇ ಮೂರು ದಿನಗಳ ಕಾಲ ಸ್ವಾಮಿಯನ್ನು ಅರ್ಚಿಸಿದರು. ಕ್ಷೇತ್ರ ವೈಭವವೇ ಅವರ ಮೂರು ದಿನಗಳ ಅನುಗ್ರಹ ಭಾಷಣವಾಗಿತ್ತು.

ಈಗಿರುವಾಗ ಕಾರಾಣಾಂತರಗಳಿಂದ ನಲವತ್ತು ವರ್ಷಗಳ ಕಾಲ ಸ್ವಾಮಿಯ ಪೂಜಾದಿಗಳು ನಿಂತುಹೋದವು.

ದೇವಸ್ಥಾನದ ಕುರಿತಾದ ಎಲ್ಲಾ ವಿಷಯಗಳು ಅಲ್ಲಿನ ಗ್ರಾಮಸ್ಥರು ಮರೆತುಹೋದರು.

ಹಾಗಾದರೆ ಈಗ ನಾವು ಆ ದೇವಸ್ಥಾನವನ್ನು ದರ್ಶಿಸಲು ಸಾಧ್ಯವೇ? ಮತ್ತೆ ಹೇಗೆ ಈ ವಿಷಯಗಳು ಎಲ್ಲರಿಗೂ ತಿಳಿದದ್ದು.

ನಂಗನಲ್ಲೂರ್ ಎಂಬ ಊರಿನಲ್ಲಿನ ಓರ್ವ ದಂಪತಿಗೆ ಮಕ್ಕಳಿರಲಿಲ್ಲ ಪ್ರತಿನಿತ್ಯ ಪೂಜೆ,ವ್ರತ, ಪರಿಹಾರ,ಶಾಂತಿ ಪೂಜೆ, ತೀರ್ಥಯಾತ್ರೆ ಯಂತ ತಮ್ಮ ದು:ಖವನ್ನು ನೀಗಿಸಿಕೊಳ್ಳಲು ಭಗವಂತನಲ್ಲಿ ಮೊರೆಯಿಡುತ್ತಿದ್ದರು.

ಕೆಲವು ವರ್ಷಗಳ ನಂತರ ಸ್ವಪ್ನದಲ್ಲಿ ಭಗದ್ದರ್ಶನವಾಯಿತು

ತನ್ನನ್ನು ಅರ್ಚಾಮೂರ್ತಿಯಾಗಿ ದರ್ಶಿಸಿ ಪೂಜಿಸಿದ್ದಲ್ಲಿ ಸತ್ಸಂತಾನ ಪ್ರಾಪ್ತಿಯಾಗುವುದೆಂದು ದೇವರ ಆದೇಶವಾಯಿತು.

ತಕ್ಷಣ ಆ ದಂಪತಿಗಳು ಅನೇಕ ದೇವಸ್ಥಾನಗಳನ್ನು ಸಂದರ್ಶಿಸಿದರೂ ಎಲ್ಲಿಯೂ ಇವರ ಕನಸಲ್ಲಿ ಕಂಡಂತ ಸ್ವಾಮಿಯ ದರ್ಶನ ಸಿಗಲಿಲ್ಲ.

ಬಹುದು:ಖದಿಂದ ಒಬ್ಬ ಮಹಾತ್ಮರ(ತಮ್ಮ ಆಚಾರ್ಯರು) ಬಳಿ ತಮಗೆ ಈ ಭಗವದ್ ಶೋಧನೇ ಏಕೆಂದು ಪರಿತಪಿಸಿದವರು.

ಆಗ ಆ ಮಹಾತ್ಮರ ಜ್ಞಾನದೃಷ್ಟಿಗೆ ಇವರ ಪೂರ್ವ ವೃತ್ತಾಂತ ಗೋಚರವಾಗಿ ಹೀಗೆಂದರು .

ನೀನು ಪೂರ್ವ ಜನ್ಮದಲ್ಲಿ ವಿಷ್ಣು ಭಕ್ತನಾಗಿದ್ದು ಸ್ವಾಮಿಗೆ ಭವ್ಯವಾದ ಮಂದಿರವನ್ನು ನಿರ್ಮಾಣ ಮಾಡಲು ಇಚ್ಛಿಸಿ ಆ ಕೋರಿಕೆ ಈಡೇರದೆ ಅಂತ್ಯ ಕ್ಷಣದವರೆಗೂ ಅದೇ ಚಿಂತೆಯಲ್ಲಿ ದೇಹತ್ಯಾಗ ಮಾಡಿದ್ದರಿಂದ ನಿನಗೆ ಜನ್ಮರಾಹಿತ್ಯವಾದ ಮೋಕ್ಷ ಸಿಗಬೇಕಾದದ್ದು ನಿನ್ನ ಆ ಅಪಾರ ಭಕ್ತಿಗೆ ಮನಸೋತ ಆ ಶ್ರೀಹರಿಯು ನಿನ್ನಿಂದ ದೇವಸ್ಥಾನ ನಿರ್ಮಾಣವನ್ನು ಮಾಡಿಸಿ ಸಕಲ ಸೇವೆಗಳನ್ನು ತೃಪ್ತಿಯಿಂದ ಪಡೆಯಬೇಕೆಂದು ನಿನಗೆ ಮತ್ತೆ ಈ ಜನ್ಮವನ್ನು ಕೊಟ್ಟಿದ್ದಾನೆ. ಈಗ



ಸ್ವಾಮಿಯು ನಿನ್ನ ಪೂರ್ವಜರು ಸ್ವಗ್ರಾಮದಲ್ಲಿ ನೆಲೆಸಿರುವನು ಎಂದು ತಿಳಿಸಿದರು.

ಆದರೆ ಇವರಿಗೆ ತಮ್ಮ ಪೂರ್ವಿಕರ ಜನ್ಮಸ್ಥಳ ತಿಳಿಯದು .

ಒಂದು ವರ್ಷದ ಕಾಲ ಹುಡುಕಿದ ನಂತರ ಮೇಲ್ವೆಣ್ಬಾಕ್ಕಂ

ತಮ್ಮವರ ಸ್ವಗ್ರಾಮವೆಂದು ತಿಳಿದು ಬಂದಿತು.

ತಕ್ಷಣ ಆ ದಂಪತಿಗಳು ಮೇಲ್ವೆಣ್ಬಾಕ್ಕಂ ಗ್ರಾಮಕ್ಕೆ ಬಂದು ದೇವಸ್ಥಾನದ ಕುರಿತು ವಿಚಾರಿಸಿದರೆ ಯಾರಿಗೂ ದೇವಸ್ಥಾನದ ಬಗ್ಗೆ ತಿಳಿಯದು.

ಅವರೇ ಸ್ವತಃ ಆ ಗ್ರಾಮದಲ್ಲಿ ಹುಡುಕಲು ಆರಂಭಿಸಿದರು

ಎಲ್ಲಾ ಕಡೆ ಹುಡುಕಿ ಸಿಗಲಿಲ್ಲ ಎಂದು ಹಿಂದಿರುಗುವ ಸಮಯದಲ್ಲಿ ಒಂದು ಹಸುವಿನ ಕೂಗನ್ನು ಕೇಳಿ ಅಲ್ಲಿ ಹೋಗಿ ನೋಡಿದರು .

ಪುರಾತನ ಕಾಲದ ಒಂದು ಸಣ್ಣ ಕಟ್ಟಡ ಹೊಳಗೇನಿರಬಹುದೆಂದು ಹೋಗಿ ನೋಡಿದರೆ ಕಗ್ಗತ್ತಲು

ಕಣ್ಣಿಗೆ ಏನೂ ಕಾಣದು ಎಂದೂ ಆಘ್ರಾಣಿಸದ ಸುವಾಸನೆ

ಏನಿರಬಹುದೆಂದು ದೀಪವನ್ನು ಹಚ್ಚಿ ಆ ದೀಪದ ಬೆಳಕಿನಲ್ಲಿ ಸುತ್ತಲೂ ನೋಡುತ್ತಾ ಇದ್ದರು.

ಮಂದಸ್ಮಿತ ಮುಖಾರವಿಂದದಿಂದ ಲೀಲೆಯಾಗಿ ಲಕ್ಷ್ಮಿಯನ್ನು ಆಲಿಂಗನ ಮಾಡಿಕೊಂಡ ನಯನ ಮನೋಹರವಾದ ಆ ಸುಂದರ ಮೂರ್ತಿ ಅವರ ಕಣ್ಣಿಗೆ ಕಾಣಿಸಿದರು ಸ್ವಪ್ನದಲ್ಲಿ ಯಾವ ಸ್ವಾಮಿಯ ದರ್ಶನವಾಯಿತೋ ಅವರೇ ಪ್ರತ್ಯಕ್ಷವಾಗಿ ಕಂಡ ತಕ್ಷಣ ರೋಮಾಂಚನೆಯಲ್ಲಿ ಮೈಮರೆತು ಹೋದರು ನಂಬಲಸಾಧ್ಯ ವಾದ ಆ ದಿವ್ಯ ಮೂರ್ತಿಯನ್ನು ಮತ್ತೆ ಮತ್ತೆ ಹೋಗಿ ನೋಡಿ .

ಆ ಗ್ರಾಮದಲ್ಲಿನ ಜನರನ್ನು ಕರೆದು ಎಲ್ಲರಿಗೂ ತಿಳಿಸಿ .

ಪೂಜಾದಿಗಳನ್ನು ಮಾಡಲು ಮುಂದಾದರು.

ಈ ಕ್ಷೇತ್ರದ ವೈಭವವನ್ನು ತಿಳಿಯಬೇಕೆಂಬ ಕುತೂಹಲದಿಂದ

ತಮಗೆ ಈ ವಿಷಯದಲ್ಲಿ ಸಹಾಯ ಮಾಡುವವರೆಂದು ವಿಚಾರಿಸಲು ಪಾಂಡಿಚೇರಿಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ.R.S.ಚರ್ಯಾರ್ ಸ್ವಾಮಿಗಳ ಬಳಿ ಹೋದರು .

ಆಶ್ಚರ್ಯಕರ ಸಂಗತಿ ಏನೆಂದರೆ ಅವರು ಅನೇಕ ವರ್ಷಗಳಿಂದ ಲಕ್ಷ್ಮೀ ನಾರಾಯಣ ಹೃದಯ ಸ್ತೋತ್ರ ಆವಿರ್ಭಾವ ಕ್ಷೇತ್ರದ ತಾಳೆಗರಗಳನ್ನಿಟ್ಟುಕಕೊಂಡು ಹಲವಾರು ದೇವಸ್ಥಾನಗಳನ್ನು ಸುತ್ತುತ್ತಿದ್ದರು.

ಇವರು ವಿಷಯವನ್ನು ತಿಳಿಸಿದ ತಕ್ಷಣ ಕ್ಷೇತ್ರಕ್ಕೆ ಆಗಮಿಸಿ ತಾಳೇಗರಿಗಳಲ್ಲಿನ ಗುರುತುಗಳನ್ನು ಹುಡುಕಲು ಕನ್ನಡಿಯಲ್ಲಿ ಕಂಡಂತೆ ಯಥಾಪ್ರಕಾರ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಈ ಪ್ರದೇಶವೇ ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿಯ ಕ್ಷೇತ್ರವೆಂದು ಶ್ರೀಲಕ್ಷ್ಮೀ ನಾರಾಯಣ ಹೃದಯ ಸ್ತೋತ್ರ ಆವಿರ್ಭಾವವಾದ ಸ್ಥಳವೆಂದು ಸಾಬಿತಾಯಿತು.

ಒಂದು ಶುಭಮೂಹೂರ್ತದಲ್ಲಿ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯವನ್ನು ಆರಂಭಿಸಿದರು ಭಗವತ್ ಕೃಪೆಯಿಂದ ನಿರ್ವಿಘ್ನವಾಗಿ ಭವ್ಯವಾದ ಮಂದಿರವು ಸಿದ್ಧವಾಯಿತು ಸ್ವಾಮಿಯ ತಿರುನಕ್ಷತ್ರವಾದ ಆಣಿಉತ್ತರಾಡಂ (ಉತ್ತರಾಷಾಡ ನಕ್ಷತ್ರ) ನಕ್ಷತ್ರದಂದು ಪ್ರತಿಷ್ಠಾ ಮಹೋತ್ಸವವನ್ನು ನಡೆಸಿದರು.

ಶ್ರೀ ಸ್ವತಂತ್ರ ಲಕ್ಷ್ಮೀ ನಾಯಿಕಾ ಸಮೇತ ಶ್ರೀ ಯುಗನಾರಾಯಣ ಸ್ವಾಮಿ ಅನುಗ್ರಹದಿಂದ ಆ ದಿವ್ಯ ದಂಪತಿಗಳಿಗೆ ಶುಭ ಗಳಿಗೆಯಲ್ಲಿ ಹೆಣ್ಣು ಮಗು ಜನನವಾಯಿತು .

ಅಂದಿನಿಂದ ಇಂದಿನವರೆಗೂ ಅಶೇಷ ಭಕ್ತಜನ ಸಂದೋಹ ಸ್ವಾಮಿಯನ್ನು ದರ್ಶಿಸುತ್ತಾ ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುತ್ತಿದ್ದಾರೆ.